ಸದನದಲ್ಲಿ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ,ದಿನಾಂಕ : 25ನೇ ಜುಲೈ, 2019

14.ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಸಾಲ ಸೌಲಭ್ಯ ನೀಡುವ ಬಗ್ಗೆ

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

134 (624) ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಉದ್ದಿಮೆದಾರರಿಗೆ ಅಥವಾ ಫಲಾನುಭವಿಗಳಿಗೆ ನೀಡುವ ಗರಿಷ್ಠ ಸಾಲ ಸೌಲಭ್ಯ ಎಷ್ಟು ; ಸಾಲ ಸೌಲಭ್ಯಕ್ಕಾಗಿ ಎಷ್ಟು ಶೇಕಡವಾರು ಆರ್ಥಿಕ ಭದ್ರತೆ ನೀಡುವುದು ಕಡ್ಡಾಯವಾಗಿರುತ್ತದೆ ;

(ಆ) ಆರ್ಥಿಕ ಭದ್ರತೆಯ ಮಿತಿಯನ್ನು ಕಡಿತಗೊಳಿಸುವ ಬಗ್ಗೆ ಸರ್ಕಾರ ಚಿಂತಿಸಿದೆಯೇ;

(ಇ) ಈಗ ಚಾಲ್ತಿಯಲ್ಲಿರುವ ಮರುಪಾವತಿಯ ಅವಧಿ ಎಷ್ಟು ; ಮರುಪಾವತಿಯ ಅವಧಿಯನ್ನು ವಿಸ್ತರಿಸಲು ಸರ್ಕಾರ ಯೋಚಿಸಿದೆಯೇ ;

(ಈ) ಆರ್ಥಿಕ ಸಮಸ್ಯೆಯಿಂದ ಕೆಲವು ಸಂದರ್ಭದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಫಲಾನುಭವಿಗಳಿಗೆ ಸಾಲ ಮರುಪಾವತಿಸಲು ಸಾಧ್ಯವಾಗದೆ ಡಿಫಾಲ್ಟರ್ ಆದಾಗ ಸಹಾಯ ಧನ ಕೊಡುವುದನ್ನು ನಿಲ್ಲಿಸಲಾಗುತ್ತಿದ್ದು, ಇದರಿಂದ ಸಾಕಷ್ಟು ಫಲಾನುಭವಿಗಳಿಗೆ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಸಾಲ ಮರುಪಾವತಿಯನ್ನು ಮರು ವಿಂಗಡಣೆ ಮಾಡಿ ಸರ್ಕಾರದ ಬಡ್ಡಿ ಸಹಾಯ ಧನವನ್ನು ನಿಲ್ಲಿಸದಿರುವ ಯೋಚನೆಯು ಸರ್ಕಾರದ ಮುಂದಿದೆಯೇ;

(ಊ) ಕೆ.ಎಸ್.ಎಫ್.ಸಿ.ಯಿಂದ ಸಾಲ ಸೌಲಭ್ಯದ ಕುರಿತು ಪ್ರಚಾರ ಕಡಿಮೆಯಾಗಿ ಫಲಾನುಭವಿಗಳು ಮಾಹಿತಿಯ ಕೊರತೆಯಿಂದ ಯೋಜನೆಯ ಸದುಪಯೋಗ ಪಡೆಯಲು ವಿಫಲರಾಗುತ್ತಿರುವುದನ್ನು ಸರ್ಕಾರ ಗಮನಿಸಿದೆಯೇ ;

(ಋ) ಸರ್ಕಾರ ರೂಪಿಸಿರುವ ಕಾಯ್ದೆಯಂತೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಗುತ್ತಿಗೆದಾರರು ಸರ್ಕಾರಿ ಕಾಮಗಾರಿಗಳಲ್ಲಿ 50 ಲಕ್ಷ ರೂಪಾಯಿಗಳವರೆಗೆ ಟೆಂಡರ್ ನಿಂದ ವಿನಾಯಿತಿ ಹೊಂದಿರುತ್ತಾರೆ, ಅವರು ಗುತ್ತಿಗೆ ಕಾಮಗಾರಿ ಮಾಡಲು ಕೆ.ಎಸ್.ಎಫ್.ಸಿ. ವತಿಯಿಂದ ಆರ್ಥಿಕ ಸಹಾಯ ನೀಡುವ ಬಗ್ಗೆ ಸರ್ಕಾರದ ಉದ್ದೇಶವಿದೆಯೇ ?